

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯಾ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 508

ಉತ್ತರಿಸಬೇಕಾದ ದಿನಾಂಕ : 05.02.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ಹಕ್ಕಿ ಜ್ವರದ ಸೋಂಕು ಹರಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದ ಯಾವುದೇ ಜಿಲ್ಲೆಗಳಲ್ಲಿ ಇತ್ತೀಚಿನ ತಿಂಗಳಿಂದ ಇದುವರೆಗೂ ಹಕ್ಕಿ ಜ್ವರದ ಸೋಂಕು ಪ್ರಕರಣ ಕಂಡುಬಂದಿರುವುದಿಲ್ಲ. |
| ಆ | ರಾಜ್ಯದಲ್ಲಿ ಎಷ್ಟು ಜಿಲ್ಲೆಗಳಲ್ಲಿ ಹಕ್ಕಿ ಜ್ವರ ಕಂಡು ಬಂದಿರುತ್ತದೆ; | ಅನ್ವಯವಾಗುವುದಿಲ್ಲ. |
| ಇ | ಹಕ್ಕಿ ಜ್ವರ ತಡೆಗಟ್ಟಲು ಸರ್ಕಾರ ಯಾವ ಕ್ರಮಕೈಗೊಂಡಿದೆ? | 1. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಪ್ರಾಣಿಜನ್ಯ ರೋಗಗಳ ತುರ್ತು ನಿರ್ವಹಣಾ ಸಮಿತಿ ಸಭೆಗಳನ್ನು ರಚಿಸಿ ಕರ್ತವ್ಯ ನಿರ್ವಹಿಸಲು ಸೂಚಿಸಲಾಗಿದೆ.<br>2. ಎಲ್ಲಾ ಜಿಲ್ಲೆಗಳಲ್ಲಿಯೂ ಹೈ ಅಲರ್ಟ್ ನಿಂದ ಹೆಚ್ಚಿನ ಗಮನ ಹರಿಸಿ ಹಕ್ಕಿಜ್ವರದ ಸರ್ವೇಕ್ಷಣೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಸೂಚಿಸಿದೆ.<br>3. ಈಗಾಗಲೇ ಕೇರಳ ರಾಜ್ಯದ ಕೊಟ್ಟಾಯಂ, ಅಲಪ್ಪುಳ ಮತ್ತು ಮಹಾರಾಷ್ಟ್ರ ರಾಜ್ಯದ ಪರ್ಬಾನಿ, ನಾಂದೇಡ್, ಸತಾರಾ, ಬೀಡ್, ಠಾಣೆ, ನಾಗ್ಪುರ, ಗಡ್ಚಿರೋಳಿ ಮತ್ತು ಲಾತೂರ್ ಜಿಲ್ಲೆಗಳಲ್ಲಿ ಹಕ್ಕಿ ಜ್ವರ ದೃಢಪಟ್ಟಿರುವ ಹಿನ್ನೆಲೆಯಲ್ಲಿ ನಮ್ಮ ರಾಜ್ಯದ ಗಡಿ ಜಿಲ್ಲೆಗಳಲ್ಲಿ ಒಟ್ಟು 22 ಚೆಕ್ ಪೋಸ್ಟ್ ಗಳನ್ನು ಸ್ಥಾಪಿಸಿ, ಅಧಿಕಾರಿ/ಸಿಬ್ಬಂದಿಗಳನ್ನು ನಿಯೋಜಿಸಿ, (24/7) ಇವುಗಳ ಮುಖಾಂತರ ಒಳಬರುವ ಕೋಳಿ ಮತ್ತು ಕೋಳಿ ಉತ್ಪನ್ನಗಳ ವಾಹನಗಳನ್ನು ಪರಿಶೀಲಿಸಿ ನೈರ್ಮಲ್ಯೀಕರಿಸಲಾಗುತ್ತಿದೆ.<br>4. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ 1063 ಕ್ಷಿಪ್ರ ಕಾರ್ಯಾಚರಣೆ ತಂಡಗಳನ್ನು (Rapid Response Teams) ರಚಿಸಿ ಸನ್ನದ್ಧರಾಗಿರಲು ಸೂಚಿಸಲಾಗಿದೆ. |

| | | | |
|---|---|---|---|
| | | 5. | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿರುವ, ವಾಣಿಜ್ಯ ಮತ್ತು ಹಿತ್ತಲ ಕೋಳಿಗಳನ್ನು ಹೊಂದಿರುವ ಮಾಲೀಕರ ಹೆಸರು ಮತ್ತು ಕೋಳಿಗಳನ್ನು ಹೊಂದಿರುವ ವಿವರಗಳನ್ನು ಪಡೆದು ದಿನನಿತ್ಯ ನಿಗಾ ವಹಿಸಿ ಪರಿಶೀಲನೆಯನ್ನು ಕೈಗೊಂಡು ಮುಂಜಾಗ್ರತಾ ಕ್ರಮವಾಗಿ ರೋಗ ನಿಯಂತ್ರಣ ರಾಸಾಯನಿಕಗಳಿಂದ ಸ್ವಚ್ಚಗೊಳಿಸುವುದು ಮತ್ತು ಜೈವಿಕ ರಕ್ಷಣಾ ಪದ್ಧತಿಗಳನ್ನು ಅನುಸರಿಸಲು ಸೂಚಿಸಲಾಗಿದೆ. |
| | | 6. | ಸಂಭಾವ್ಯ ಕೋಳಿಶೀತ ಜ್ವರ ರೋಗೋದ್ರೇಕ ನಿಭಾಯಿಸಲು ಅವಶ್ಯಕವಾಗಿ ಬೇಕಾಗಿರುವ ಪರಿಕರಗಳು ಮತ್ತು ರಾಸಾಯನಿಕಗಳನ್ನು ಎಲ್ಲಾ 30 ಜಿಲ್ಲೆಗಳಲ್ಲಿ ಸಂಗ್ರಹಿಸಿ ದಾಸ್ತಾನೀಕರಿಸಿದೆ. |
| | | 7. | ಜಿಲ್ಲೆಗಳಲ್ಲಿರುವ ಪಕ್ಷಿಧಾಮ ಹಾಗೂ ವಲಸೆ ಹಕ್ಕಿಗಳು ಹೆಚ್ಚಾಗಿ ಕಂಡುಬರುವ ಸ್ಥಳಗಳು, ನೀರು ಸಂಗ್ರಹಣಾ ವಿವರಗಳನ್ನು ಪಡೆದು ಕೆರೆಕುಂಟೆಗಳಿಂದ ಪರಿಸರ ಮಾದರಿಗಳನ್ನು ಸಂಗ್ರಹಿಸಿ ವಿಶ್ಲೇಷಣೆಗಾಗಿ ಪಶುಆರೋಗ್ಯ ಮತ್ತು ಜೈವಿಕ ಸಂಸ್ಥೆಗಳ ಪ್ರಯೋಗಾಲಯಕ್ಕೆ ಪ್ರತೀ ವಾರ ಕಳುಹಿಸಲಾಗುತ್ತಿದೆ. |
| | | 8. | ಸಂಬಂಧಪಟ್ಟ ಅರಣ್ಯಾಧಿಕಾರಿಗಳು ಅರಣ್ಯ ಪ್ರದೇಶಗಳಲ್ಲಿ ವಲಸೆ ಹಕ್ಕಿಗಳು, ವನ್ಯ ಪಕ್ಷಿಗಳ ಚಲನವಲನದ ಸ್ವಭಾವದಲ್ಲಿನ ವ್ಯತ್ಯಾಸಗಳ ಬಗ್ಗೆ ಗಮನ ಹರಿಸಲು ಸೂಚಿಸಲಾಗಿದೆ ಹಾಗೂ ವನ್ಯ ಪಕ್ಷಿಗಳ ಅಸ್ವಾಭಾವಿಕ ಸಾವಿನ ಬಗ್ಗೆ ನಿಗಾ ವಹಿಸಲಾಗುತ್ತಿದೆ ಹಾಗೂ ವಲಸೆ ಹಕ್ಕಿಗಳ ಹಿಕ್ಕೆಗಳನ್ನು ವಿಶ್ಲೇಷಣೆಗಾಗಿ ಪ್ರಯೋಗಾಲಯಕ್ಕೆ ಸಲ್ಲಿಸಲಾಗುತ್ತಿದೆ. |

**ಪಸಂಮೀ ಇ–43 ಸಲೆವಿ 2021**

**ಪ್ರಭು ಬಿ. ಚವ್ಹಾಣ್**
**ಪಶುಸಂಗೋಪನೆ ಸಚಿವರು**